

**23ನೇ ಜೂನ್ 2016–** ಮಂಡ್ಯ ಜಿಲ್ಲೆಯ ಭೇಟಿಯ ಸಂದರ್ಭದಲ್ಲಿ ನಮ್ಮ ಜಿಲ್ಲಾ ಸಂಸ್ಥೆಯ ಸಂಪನ್ಮೂಲ ತಂಡದ ಸದಸ್ಯರೊಂದಿಗೆ ಫೌಂಡೇಷನ್‌ನ ಸಿಇಓ ದಿಲೀಪ್ ರಂಜೇಕರ್ ಇದ್ದ ಕ್ಷಣ. ಸಂಸ್ಥೆಯ ನಾಯಕತ್ವ ಸ್ಥಾನದಲ್ಲಿರುವವರು ಕಾರ್ಯಕ್ಷೇತ್ರಕ್ಕೆ ಹೀಗೆ ಆಗಾಗ್ಗೆ ಭೇಟಿ ನೀಡುವುದು ಉಪಯುಕ್ತ ಒಳನೋಟಗಳನ್ನೊದಗಿಸುತ್ತದೆ. ಅಲ್ಲದೆ, ತಂಡದ ಸದಸ್ಯರಿಗೆ ಮುಂದಿನ ನಡೆಗಳ ಬಗ್ಗೆ ಸ್ಪಷ್ಟಚಿತ್ರಣ ಸಿಗುತ್ತದೆ.



**1ನೇ ಮಾರ್ಚ್ 2010–** ಜೈಪುರದಲ್ಲಿ ನಡೆದ ಫೌಂಡೇಷನ್‌ನ ರಾಜ್ಯ ಮತ್ತು ಜಿಲ್ಲಾ ಸಂಸ್ಥೆಗಳ ಮುಖ್ಯಸ್ಥರ ಸಮಾವೇಶದಲ್ಲಿ ಆಗಿನ ಕ್ಷೇತ್ರ ಸಂಸ್ಥೆಗಳ ಮುಖ್ಯಸ್ಥರಾಗಿದ್ದ ಆನಂದ್ ಸ್ವಾಮಿನಾಥನ್ ಜೊತೆಯಲ್ಲಿ. ಈ ರೀತಿಯ ವೇದಿಕೆಗಳು ವಿವಿಧೆಡೆಗಳಲ್ಲಿ ಜಾರಿಯಾದ ಉತ್ತಮ ಕ್ರಮಗಳ ಹಿನ್ನೆಲೆಯಲ್ಲಿ ನಮ್ಮ ಕಾರ್ಯಯೋಜನೆಗಳನ್ನು ಗಟ್ಟಿಗೊಳಿಸಿ, ಮರುರೂಪಿಸಿಕೊಳ್ಳಲು ನೆರವಾಗಿವೆ.